# ಕಾನನ

ನಿಸರ್ಗದೆಡೆಗೆ ಪಯಣ

**ಸಂಪಾದಕೀಯ**

ಅಶ್ವಥ ಕೆ.ಎನ್

**ಲೇಖನ ವೃಂದ**

ಸ್ವಾಮಿ ಸೌಖ್ಯಾನಂದಜೀ ಮಹಾರಾಜ್

ಶಂಕರಪ್ಪ ಕೆ.ಪಿ

ಅಶ್ವಥ ಕೆ.ಎನ್

ಕೃಷ್ಣನಾಯಕ್

ಶ್ರೀಕಾಂತ್ ಬಿ. ಭಟ್

**ಕರಡು ತಿದ್ದುಪಡಿ**

ಮುರಳಿ ಎಸ್

**ವಿನ್ಯಾಸ**

ನಾಗೇಶ್ ಓ.ಎಸ್

**ಛಾಯಾಚಿತ್ರ**

ಕಾರ್ತಿಕ್ ಎ.ಕೆ

**ಇ-ವಿಳಾಸ**

kaanana.mag@gmail.com

www.issuu.com/kaanana

**ಮುಖಪುಟ**

ಹಸಿರು ಮಂಡಲ

WILDLIFE CONSERVATION GROUP





























# ಸಂಪಾದಕೀಯ

ನವರಾತ್ರಿಯ ಶುಭಾಶಯಗಳು

ನಮ್ಮ ಹೆಮ್ಮೆಯ ನಾಡಹಬ್ಬ ದಸರ. ರಾಜ ವೈಭವದಿಂದ ನೆಡೆಯುವ ದಸರದ ಅಂಬಾರಿ ಮೆರವಣಿಗೆಗೆ ಜಗತ್ ಪ್ರಸಿದ್ಧವಾದದು. ಮುಕ್ಕಾಲು ಟನ್ ತೂಕದ ಚಿನ್ನದ ಅಂಬಾರಿಯನ್ನು ಹೊತ್ತು ಸಾಗುವ ಆನೆಯನ್ನು ನಾವು ಭಕ್ತಿ ಗೌರವದಿಂದ ಕಾಣುತ್ತೇವೆ. ಆದರೆ ನಾಡಿನ ಅಳಿದುಳಿದ ಕಾಡುಗಳಲ್ಲಿ ಇರುವ ಕಾಡು ಆನೆಗಳು ಕಷ್ಟಪಟ್ಟು ಬದುಕು ಸಾಗಿಸುತ್ತಿವೆ. ಬರಿದಾಗುತ್ತಿರುವ ನೀರಿನ ಒರತೆಗಳು, ಖಾಲಿಯಾಗುತ್ತಿರುವ ಕಾಡು, ಕಾಳ್ಗಿಚ್ಚಿನಿಂದಾಗಿ, ಮೇವಿಲ್ಲದೆ, ನೀರಿಲ್ಲದೆ, ಕಾಡಾನೆಗಳ ಸ್ಥಿತಿ ಶೋಚನೀಯವಾಗಿದೆ. ಇನ್ನೂ ಮೇವನ್ನು ಹರಸಿ ಮಾನವರ ವಾಸಸ್ಥಳಕ್ಕೆ ಅಪ್ಪಿ ತಪ್ಪಿ ಬಂದರೆ ಬಂದೂಕುಗಳಿಂದ ಗುರಿಯಿಟ್ಟು ಕಾಡಿಗೆ ಅಟ್ಟುತ್ತೇವೆ.

ಇನ್ನು ದಸರದ ಆನೆಯ ಮೇಲಿನ ಅಂಬಾರಿಯನ್ನು ನಮ್ಮ ಸಾವಿರಾರು ಮೊಬೈಲ್ ಕ್ಯಾಮರಾಗಳಲ್ಲಿ ಸೆರೆಹಿಡಿದು ವಿಜೃಂಭಣೆಯಿಂದ ಆಚರಿಸುತ್ತೇವೆ. ವನ್ಯ ಜೀವಿಗಳನ್ನೂ ಪೂಜಿಸುವ ಸಂಸ್ಕೃತಿ ನಮ್ಮದು. ಆದರೆ ಇಂದು ಅಭಿವೃದ್ದಿಯ ಹೆಸರಿನಲ್ಲಿ ಗಣಿಗಾರಿಕೆಗೆ, ಕೃಷಿಗೆ, ರಸ್ತೆ ನಿರ್ಮಾಣಕ್ಕೆ, ಕೈಗಾರಿಕೆಗೆ ಹೀಗೆ ಹಲವು ಉದ್ದೇಶಕ್ಕೆ ಕಾಡಿನ ವಿಸ್ತೀರ್ಣ ಕಡಿಮೆಯಾಗುತ್ತಿದೆ. ಕಾಡಿನ ಜೀವಿಗಳ ಬದುಕುವ ಹಕ್ಕನ್ನು ನಾವು ಕಸಿದುಕೊಳ್ಳುತ್ತಿದ್ದೇವೆ. ಅವುಗಳ ರಕ್ಷಣೆಗೆ ನಮ್ಮ ನಾಡಿನ ಯುವಜನತೆ ಕಾಳಜಿವಹಿಸಲು ಇದು ಸಕಾಲ.

ನಾವು ಆನೆಗಳನ್ನು ವಿದ್ಯುತ್ ಹರಿಸಿ ಕೊಂದಿದ್ದೇವೆ. ಗುಂಡಿಕ್ಕಿ ಸಾಯಿಸಿದ್ದೇವೆ. ಬೆಂಕಿಯಿಟ್ಟು ಅವುಗಳ ಆವಾಸವನ್ನು ಸುಟ್ಟಿದ್ದೇವೆ. ಗಣಿಗಾರಿಕೆ ಮಾಡಿ, ರಸ್ತೆಗಳನ್ನು ನಿರ್ಮಿಸಿ, ಕಾಡಿನ ರಾಜನಂತೆ ಮೆರೆಯುವ ಆನೆಯ ನೆಮ್ಮದಿ ಹಾಳುಮಾಡಿದ್ದೇವೆ. ಈ ಸೂಕ್ಷ್ಮಸಂವಹನೆಯ ಭೂಮಿಯ ಮೇಲಿನ ಈ ಬೃಹತ್ ಜೀವಿಯು ಅನುಭವಿಸುತ್ತಿರುವ ನೋವಿಗೆ ಸ್ಪಂದಿಸಿ ಅವುಗಳ ರಕ್ಷಣೆಗೆ ಮುಂದಾಗೋಣ.

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.**

ಈ-ಅಂಚೆ : kaanana.mag@gmail.com

**Wildlife Conservation Group**





# ಆಧ್ಯಾತ್ಮದಲ್ಲಿ ವನ್ಯಜೀವಿಗಳು

## ಶ್ರೀ ರಾಮಕೃಷ್ಣರ ಉಪದೇಶಗಳಲ್ಲಿ ಪ್ರಾಣಿಪಕ್ಷಿಗಳು

### * ಮಾಯಾಶಕ್ತಿ

ಭಗವಂತನು ತನ್ನ ಮಾಯಾಶಕ್ತಿಯಿಂದ ಈ ಜಗತ್ತನ್ನು ಸೃಷ್ಟಿಸಿ ಎಲ್ಲರನ್ನು ಅದರಲ್ಲಿ ಬಂಧಿಸಿ, ಒಂದು ರೀತಿಯಲ್ಲಿ ಆಟವಾಡುತ್ತಿದ್ದಾನೆ. ನಮ್ಮೆಲ್ಲರನ್ನೂ ಸಹ ಯಂತ್ರಗಳಂತೆ ಆಡಿಸುತ್ತಿದ್ದಾನೆಂದು ಶಾಸ್ತ್ರಗಳು ಹೇಳುತ್ತವೆ. ಭಗವಂತನು ಸೃಷ್ಟಿಸಿದ ಮಾಯೆಯಲ್ಲಿ ಅವನೇ ಕೆಲವೊಮ್ಮೆ ಸಿಕ್ಕಿಕೊಂಡು ಬಹಳ ಕಷ್ಟಪಡುತ್ತಾನೆ. ಇನ್ನು ಮಾನವರ ಕತೆಯೇನು?



ಅದಕ್ಕೆ ಶ್ರೀರಾಮಕೃಷ್ಣರು ಈ ಕತೆ ಹೇಳುತ್ತಿದ್ದರು. ಹಿರಣ್ಯಕಶಪು ಮತ್ತು ಹಿರಣ್ಯರೆಂಬ ರಾಕ್ಷಸರು ಜನಿಸಿ ಭೂಮಿಯಲ್ಲಿ ಎಲ್ಲರನ್ನು ಹಿಂಸಿಸುತ್ತಿದ್ದರು. ಹಿರಣ್ಯಾಕ್ಷನನ್ನು ಕೊಲ್ಲಲು ವಿಷ್ಣುವು ವರಹ (ಹಂದಿ) ರೂಪತಾಳಿ ಬಂದಾಯಿತು. ಕೊಂದ ಮೇಲೆ ಮಕ್ಕಳು ಮರಿಗಳನ್ನು ಮಾಡಿಕೊಂಡು, ಹಂದಿ ತನ್ನ ನಿಜರೂಪವನ್ನು ಮರೆತು ಮರಿಗಳನ್ನು ಸಾಕುವುದರಲ್ಲಿ ನಿರತವಾಯಿತು, ವೈಕುಂಠದಲ್ಲಿರುವ ದೇವತೆಗಳು ನೀನು ಹಂದಿ ಜನ್ಮವನ್ನು ಬಿಟ್ಟು ನಿನ್ನ ಪರಂಧಾಮಕ್ಕೆ ಬಾ" ಎಂದು ಎಷ್ಟು ಕೇಳಿದರು ವಿಷ್ಣು ಕೇಳಲಿಲ್ಲ. ತನ್ನ ಹಂದಿಯ ಅವಸ್ಥೆಯಲ್ಲಿಯೇ ಆನಂದದಿಂದ ಇದ್ದ. ದೇವತೆಗಳು ತಮ್ಮಲ್ಲಿ ಮಾತನಾಡಿಕೊಂಡು ಶಿವನನ್ನು ಹಂದಿಯ ಬಳಿ ಕಳುಹಿಸಿದರು. ಶಿವನು ವಿಷ್ಣುವಿಗೆ "ನೀನು ಹೇಗೆ ನಿನ್ನ ನಿಜವಾದ ಅವಸ್ಥೆಯನ್ನು ಮರೆತುಬಿಟ್ಟೆ?" ಎಂದು ಕೇಳಿದನು.

ವಿಷ್ಣು ಹಂದಿಯ ಮೂಲಕ "ಹಾಗೇನಿಲ್ಲ ನಾನು ಇಲ್ಲಿ ಚೆನ್ನಾಗಿಯೇ ಇದ್ದೇನೆ" ಎಂದು ಉತ್ತರಿಸಿದನು, ವಿಷ್ಣು ಅಂತಹ ವನ್ಯಜೀವಿಯಾದ ಹಂದಿಯ ರೂಪದಲ್ಲಿಯೇ ಸಂತೋಷದಿಂದ ಆನಂದದಿಂದ ಇದ್ದ ಎಂಬುದನ್ನು ಇಲ್ಲಿ ಗಮನಿಸಬಹುದು. ವಿಷ್ಣುವಿನ ಹಂದಿರೂಪವನ್ನು ಶಿವ ತನ್ನ ತ್ರಿಶೂಲದಿಂದ ದೇಹವನ್ನು ಸೀಳಿದನು, ಆಗ ವಿಷ್ಣು ವೈಕುಂಠಕ್ಕೆ ಹೋದನು". ಇದನ್ನು ಹೇಳಿ ಶ್ರೀರಾಮಕೃಷ್ಣರು ಹೇಳುತ್ತಾರೆ, ಪ್ರತಿಯೊಬ್ಬರು ಮಾಯೆಯ ಅಧೀನದಲ್ಲಿರುತ್ತಾರೆ, ದೇವರು ಅವತಾರಗಳೂ ಕೂಡ ತಮ್ಮ ಆಶ್ರಯವನ್ನು ತಮ್ಮ ಪಾಲಿನ ಕೆಲಸವನ್ನು ಮಾಡುತ್ತಾರೆ, ಅದಕ್ಕಾಗಿಯೇ ಮಾಯೆಯನ್ನು ಕೊಂಡಾಡುವುದು.



- ಸ್ವಾಮಿ ಸೌಖ್ಯಾನಂದಜೀ ಮಹಾರಾಜ್



# ಹಸಿರು ಮಂಡಲ

ಜೋರಾಗಿ ಸುರಿದ ಮಳೆ. ಮೂರು ಹಗಲು ಮೂರು ರಾತ್ರಿ ಬಿಟ್ಟರೂ ಬಿಡದಂತೆ ತೊಟಕಾ ತೊಟಕಾ ತೂಗಡಿಸುತ್ತಾ ಬಿದ್ದ ಆ ಜಡಿಮಳೆಯ ಹನಿಗಳ ಸದ್ದಿಗೆ ಗಾರೆ ನೆಲದ ಮೇಲೆ ಮಲಗಿದ್ದ ನನಗೆ ನಿದ್ದೆ ಬರದೆ ಎದ್ದು ಕುಳಿತೆ. ಸೂರಿನಲ್ಲಿ ನೀರು ತೊಟ್ಟಿಕ್ಕುತ್ತಿತ್ತು. ದೋ..... ಎಂದು ಸುರಿಯುವ ಮಳೆ, ಸುತ್ತಲೂ ಕತ್ತಲು, ಬೆಳಕಿಲ್ಲಾ, ಕರಂಟಿಲ್ಲಾ!, ರಾತ್ರಿ ಬೀಸಿದ ಬಿರುಗಾಳಿಗೆ ಎಲ್ಲೊ ಲೈನುಗಳು ಜಕಮ್ ಆಗಿರಬೇಕು ಎಂದು ಯೋಚಿಸಿದೆ. ಕಿಟಕಿ ತೆಗೆದು ಆಚೆ ನೋಡಬೇಕೆನಿಸಿತು, ಕತ್ತಲು! ಹೆಂಚಿನ ಸಂದುಗೊಂದುಗಳಲ್ಲಿ ನೀರಿನ ಸಣ್ಣ ಸಣ್ಣ ಹನಿಗಳು ಅಲ್ಲಲ್ಲಿ ಬೀಳುವ ಸದ್ದಾಗುತ್ತಿತ್ತು, ದೂರದಲ್ಲೆಲ್ಲೋ ಮಿಂಚಿತು. ಗುಡುಗು ಕೇಳುವುದೆಂದು ಕಿವಿಯರಳಿಸಿ ಕೇಳಿಸಿಕೊಂಡರೂ ಗುಡುಗು ಕೇಳಿಸಲಿಲ್ಲ. ಭಯಂಕರ ನಿದ್ದೆ ಮಾಡಿ ಎದ್ದಮೇಲೆ ಎಲ್ಲಿ ಗೊತ್ತಾಗುತ್ತದೆ ಟೈಮು? ತಲೆಯಲ್ಲಿ ಯಾವ ಯೋಚನೆಯೂ ಬಾರದ ಶೂನ್ಯ ಸ್ಥಿತಿ. ತಲೆ ಖಾಲಿ ಕೊಡದಂತಾಗಿತ್ತು, ಪಕ್ಕಕ್ಕೆ ಹೊರಳಿ ಮಲಗಿದೆ, ಬೆಳಗಾಯಿತು.

ಗೂಂಯ್ ಗುಡುತ್ತಾ ಸೂರಿನ ದುಂಬಿ ಮನೆಯೆಲ್ಲಾ ಸುತ್ತಿಕ್ಕಿ ಗೂಂಯ್ ಗುಡುತ್ತಿತ್ತು. ಹೊಂಬಿಸಿಲಿನಲ್ಲಿ ಕುಳಿತು ಕಾಫಿ ಕುಡಿವಾಗ ಆ ಎಳೆಬಿಸಿಲಿನ ಫೋಟಾನುಗಳು ಮೈಯ ತಾಕಿ ಬಿಸಿಯಾಗುತ್ತಿದ್ದರೆ, ಬಿಸಿ ಬಿಸಿ ಕಾಫಿ ಮೆದುಳನ್ನು ತಟ್ಟಿ ತಟ್ಟಿ ಎಚ್ಚರಿಸುತ್ತಿತ್ತು. ಮನೆಯ ಮುಂದಿನ ತಡಿಕೆ ಬಾಗಿಲನ್ನು ಸರಿಸಿ ನಮ್ಮ ತೋಟದ ಆಳು, ಕರಿಯನ ಹೆಂಡತಿ *ಲಚ್ಮಿ* ದಡ ದಡ ಎಂದು ಮನೆಯ ಕಡೆ ಬರುತ್ತಿದ್ದುದು ಕಾಣಿಸಿತು. ಅವಳ ಹಿಂದೆಯೇ ಅವಳ ಆರೇಳು ವರುಷದ ಹೆಣ್ಣು ಕೂಸು *ರೇರಿ*, ಅವ್ವನ ಸೆರಗಿಡಿದು ಬರುತ್ತಿತ್ತು.



ದುಡುದುಡುನೆ ಬಂದ *ಲಚ್ಮಿ* "ಸ್ವಾಮೆ, ಒಂದು ಮೆಣಸಿನಕಾಯಿ ಇದ್ರೇ ಕೊಡಿ" ಎಂದಳು. ಅವಳ ಮುಖದಲ್ಲಿ ಗಾಬರಿ ಇತ್ತು, ಆತಂಕವಿತ್ತು!. ಅವಳ ಸೆರಗಿಡಿದು ನಿಂತಿದ್ದ ***ರೇರಿ***ಯು ಮೇಲೆ ಕೆಳಗೆ ನೋಡುತ್ತಾ, ಅಂಗಳದಲ್ಲಿ ಮರಿಗಳಿಗೆ ಹಾಲು ಕುಡಿಸುತ್ತಿದ್ದ ನಮ್ಮ ನಾಯಿ ರಾಣಿಯನ್ನೇ ಬೆರಗಿನಿಂದ ನೋಡುತ್ತಿತ್ತು. ನನಗೆ ಸಾವಿಲ್ಲದ ಮನೆಯ ಸಾಸಿವೆಯ ಕಿಸಾಗೌತಮಿ ಜ್ಞಾಪಕಕ್ಕೆ ಬಂದಳು. ಸಾಸಿವೆಯನ್ನು ಕೇಳುವುದನ್ನು ಬಿಟ್ಟು ಒಂದೇ ಒಂದು ಮೆಣಿಸಿನಕಾಯಿ! ಸಾರಿಗೆ ಸಾಕಾಗುತ್ತದೆಯೇ? ಎಂದು ಒಂದೇ ಒಂದು ಮೆಣಿಸಿನಕಾಯಿ ಸಾಕಾ? ಎಂದೆ.

"ಅಯ್ಯೋ!...... ನನ್ನ ಗಾಚಾರ ಸರಿಯಿಲ್ಲಾ, ದಾರಿಲಿ ಬರಬೇಕಾದ್ರೆ ಆ ತಾರೆಮರತ್ತಾವು. ಅದರ ಮನೆ ಹಾಳಾಗ ದಾರಿಲೇ ಮಲುಗಿ ಬಿಟ್ಟಿತ್ತು ಹಾವು. ನಾನು ನೋಡ್ದೆ ತುಳಿದೇ ಬಿಟ್ಟೆ, ಕಾಲಿಗೆ ಸವ್ರಕೊಂಡೇ ಓಯ್ತು" ಎಂದು ತನ್ನ ಬಲಗಾಲ ಹೆಬ್ಬರಳನ್ನು ತೋರಿಸಿ ಮೊದಲು ಮೆಣಿಸಿನಕಾಯಿ ಕೊಡಿ ಎಂದಳು.

ಹಾವು ಕಚ್ಚಿದ್ದಕ್ಕೆ ಮೆಣಿಸಿನಕಾಯಿ ಹೇಗೆ ಔಷಧಿ ಎಂದು ನನಗೆ ತಕ್ಷಣ ಹೊಳೆಯಲಿಲ್ಲಿ. ಹಸಿ ಮೆಣಿಸಿನಕಾಯಿ ಬೇಕೋ? ಒಣ ಮೆಣಸಿನಕಾಯಿ ಬೇಕೋ? ಎಂದು ಕೇಳೋಣವೆ ಎನಿಸಿತು. ಆದರೂ ಏನೋ ಕಾಲಿಗೆ ತಿಕ್ಕಿಕೊಳ್ಳುತ್ತಾಳೇನೋ ಎಂದು ಅಡುಗೆ ಮನೆಯಿಂದ ಒಂದೆರಡು ಕೆಂಪು ಮೆಣಸಿನ ಕಾಯಿ ತಂದು ಕೊಟ್ಟೆ.

ಆ ಭಯಾನಕ ಖಾರದ ಕೆಂಪು ಮೆಣಸಿನ ಕಾಯಿಯನ್ನು ಆಕೆ ಚಕ್ಕುಲಿಯಂತೆ ಖರುಮ್ . . ಖರುಮ್ . . .ಎಂದು ತಿನ್ನಲು ಶುರು ಮಾಡಿದಳು. ತಕ್ಷಣವೇ ನಾಲಿಗೆಗೆ ತೀಕ್ಷ್ಣ ಖಾರವು ಕಂಡು ಬಂದು, ಮನೆಯ ಮುಂದಲ ಹೆಬ್ಬಲಿಸಿನ ಮರದ ಬುಡಕ್ಕೆ ಥೂ ಎಂದು ಉಗಿದಳು.

ಖಾರಾ . . . ಕಾರಾ ,. . . ನೀರೂ. . . ನೀರೂ. . . . ಎಂದು ಬೊಬ್ಬೆಯಿಟ್ಟಳು .

ನೀರು ತಂದು ಕೊಟ್ಟೆ. ಒಂದು ಲೀಟರ್ ನೀರನ್ನು ಗಟಗಟನೆ ಕುಡಿದು ಉಸ್ ಎಂದು ಸುಧಾರಿಸಿಕೊಂಡಳು. ಖಾರದ ತೀಕ್ಷ್ಣಕ್ಕೆ ಆಕೆಯ ಕಣ್ಣಲ್ಲಿ ನೀರು ಬಳ-ಬಳ ಎಂದು ಧಾರಾಕಾರವಾಗಿ ಹರಿಯುತ್ತಿತ್ತು.

ಕಣ್ಣೀರನ್ನು ತನ್ನ ಸೆರಗಿನಿಂದ ಒರಸಿಕೊಂಡು, “ಸದ್ಯ ಬದುಕಿದೆ !.

ಹಾವು ಕಚ್ಚಿಲ್ಲಾ.!

*“ಹಾವೇನಾದ್ರೂ ಕಚ್ಚಿದ್ರೆ ಅದು ಕಚ್ಚಿದೆಯೋ? ಇಲ್ಲವೋ? ! ಎಂದು ಗೊತ್ತಾಗಬೇಕಾದರೆ ಮೆಣಸೇಕಾಯಿ ತಿನ್ನಬೇಕು ಅದೇನಾದ್ರು ಕಾರ ಕಂಡುಬಂದರೆ ಕಚ್ಚಿಲ್ಲಾ ಎಂದು ಅರ್ಥ. ಹಾವೇನಾದ್ರೂ ನಿಜವಾಗ್ಲೂ ಕಚ್ಚಿದ್ರೆ ಮೆಣಸಿನಕಾಯಿಯೂ ತಿಂದರೂ ಸಗಣಿ ತಿಂದಂಗೆ ಇರ್ತದೆ. ರೊವಷ್ಟೂ ಖಾರ ಆಗಲ್ಲ”.* ಎಂದು ನಮ್ಮಜ್ಜಿ ಮುನೀರಿ ಹೇಳಿದ್ದಳು. ಎಂದು ಮುಗ್ದವಾಗಿ ಹೇಳಿದಳು. ಅದಕ್ಕೆ ಮೆಣಸಿನ ಕಾಯಿ ತಿಂದು ತನಗೆ ಹಾವು ಕಚ್ಚಿದೆಯೋ? ಇಲ್ಲವೋ? ಎಂದು ಟೆಸ್ಟ್ ಮಾಡಿಕೊಂಡಿದ್ದಳು! ಟೆಸ್ಟ್ ನಲ್ಲಿ ಪಾಸಾಗಿದ್ದಳು !.



ನಾನೂ ಅವಳ ಕಾಲನ್ನು ಪರೀಕ್ಷಿಸಿದೆ. ಕಾಲಲ್ಲಿ ಹಾವು ಕಚ್ಚಿದ ಯಾವುದೇ ಕುರುಹು ಕಾಣಲಿಲ್ಲ. ಆ ಹಾವು ಸುಮ್ಮನೆ ಕಾಲಿಗೆ ಸವರಿಕೊಂಡು ಹೋಗಿತ್ತು ಅಷ್ಟೆ. ನಮ್ಮ ವಿಶಾಲ ಭಾರತದ ಭೂ ಪ್ರದೇಶದಲ್ಲಿ ಕೇವಲ ನಾಲ್ಕೇ ನಾಲ್ಕು ಹಾವುಗಳೂ ಮಾತ್ರ ಮಾರಣಾಂತಿಕವಾದವು. ಉಳಿದ ಹಾವುಗಳು ಕಚ್ಚಿದರೂ ಸಾಯೋದೂ ತೀರ ಅಪರೂಪ. ನೀನು ತುಳಿದ ಹಾವು ಹೇಗಿತ್ತು ಹೇಳು ಮೊದಲು? ಎಂದು ಸಣ್ಣ ಲಕ್ಚರ್ ಕೊಟ್ಟೆ. ಪ್ರಶ್ನೆಯನ್ನೂ ಕೇಳಿದೆ. ಬಿಸಿಬಿಸಿ ಕಾಫಿಯನ್ನು ಕೊಟ್ಟೆ. ಕಾಫಿ ಕುಡಿದು ಸ್ವಲ್ಪ ಹಾವಿನ ಭಯದಿಂದ ಚೇತರಿಸಿಕೊಂಡು "ಏ ಸ್ವಾಮೆ ಅದು ಒಂದು ಮೊಳ ಉದ್ದ ಹಸುರಾಗಿತ್ತು. ಅಲ್ಲೇ ಎಲ್ಲೋ ಇರತದೆ ಬರ್ರಿ ತೋರಸ್ತೀನಿ" ಎಂದು ನನ್ನನ್ನು ಕರೆದು ಕೊಂಡು ತೋಟದ ಕೆರೆದಾರಿಯಲ್ಲಿರುವ ಹೆಬ್ಬಿದಿರು ಮೆಳೆಯ ಬಳಿ ಒಂದು ಕಡ್ಡಿಯ ಮೇಲೆ ಆರಾಮವಾಗಿ ನೆಲಮಟ್ಟದಲ್ಲೇ ಮಲಗಿದ್ದ Bamboo pit viper ವಿಷಕಾರಿ ಹಾವನ್ನು ತೋರಿಸಿದಳು.

ನಾನು ಈ ಜಾತಿ ಹಾವನ್ನೇ ಬಹು ದಿನದಿಂದಲೇ ಫೋಟೊ ತೆಗೆಯಲು ಹುಡುಕುತಿದ್ದೆ. ನನಗೋ ಈ ಅಪರೂಪದ ವಿಷಕಾರಿ ಹಾವನ್ನು ಕಂಡು ಖುಷಿಯಾದರೆ, ಅವಳಿಗೋ ಸಾವು ಕಾಲಬಳಿಯೇ ಬಂದು ಸ್ವಲ್ಪದರಲ್ಲೇ ಬದುಕಿದಕ್ಕೆ. ಮನಸ್ಸು ತನ್ನ ಗಂಡನನ್ನು, ತನ್ನ ಮಕ್ಕಳನ್ನು ನೆನೆದು ಮನೆ ಸೇರಿತ್ತು. ಏನೇನೋ ಒಂದೇ ಸಮನೆ ತಡವರಿಸುತ್ತಿದ್ದಳು.

ಯಾವುದೋ ಪೂರ್ವ ಜನ್ಮದ ಪುಣ್ಯ.

ಬೆಳಿಗ್ಗೆ ಯಾರ ಮಕ ನೋಡಿದ್ದೆನೋ? ಈವತ್ತು!.

ಬೆಳ್ಳಿಗ್ಗೆ  ಬಲ ಮಗ್ಗುಲಿನಲ್ಲಿ ಎದ್ದಿದ್ದೆ.

ಆ ಸ್ವಾಮಿ ನಾಗಪ್ಪನೇ ನನ್ನನ್ನು ಕಾಪಾಡಿರಬೇಕು ಎಂದು ಏನೇನೋ ವದರುತ್ತಾ ಸಾವಿನಿಂದ ಬದುಕಿದ ಖಷಿಯಲ್ಲಿ ನಿಬಿಡ ಕಾಡುದಾರಿಯಲ್ಲಿ ಸಾಗಿ ಆ ಕಾನನದಲ್ಲಿ ಕರಗಿ ಮಾಯವಾದಳು.



- ಮುಂದುವರಿಯುವುದು



- ಶಂಕರಪ್ಪ ಕೆ.ಪಿ



ವಿವಿ ಅಂಕಣ

# ವಿದ್ಯಾರ್ಥಿಗಾಗಿ ವಿಜ್ಞಾನ

## *ಗರ್ಭದಲ್ಲಿರುವಾಗಲೇ ಕಲಿಯುವ ಕೂಸು.*



ಮಗು ಗರ್ಭದಲ್ಲಿರುವಾಗಲೇ ಶಬ್ಧಗಳನ್ನು ಕೇಳಿಸಿಕೊಳ್ಳುತ್ತದೆ. ಅಷ್ಟೇ ಅಲ್ಲ ಕೇಳಿಸಿಕೊಂಡ ಪದಗಳನ್ನು ಮತ್ತೆ ಗುರುತಿಸಬಲ್ಲವು. ಎಂದು ಎಲ್ಸ್ ಲಿಂಕ್ ಯೂನಿವರ್ಸಿಟಿಯ ಈನೋ ಎಂಬ ವಿಜ್ಞಾನಿಯ ತಂಡವು ಕಂಡುಹಿಡಿದಿದ್ದಾರೆ.

ಆರು ತಿಂಗಳ ತುಂಬಿದ ಗರ್ಭಿಣಿಯರಿಗೆ ಪ್ರತೀ ದಿನ ನಾಲ್ಕು ನಿಮಿಷಗಳ ಕಾಲ *"ತಾ, ತಾ, ತಾ,"* ಎಂಬ ಹಾಡನ್ನು ಜೋರಾಗಿ ಕೇಳಿಸಿದ್ದಾರೆ. ಆ ಗರ್ಭಿಣಿಯರಿಗೆ ಮಗು ಹುಟ್ಟಿದ ನಂತರ ಮಗುವಿನ ಮೆದುಳಿನಲ್ಲಿ ನಡೆಯುವ ವಿದ್ಯಮಾನಗಳನ್ನು ಗ್ರಹಿಸುವ ಎಲೆಕ್ಟ್ರೋಡ್ ಗಳನ್ನು ಮಗುವಿನ ತಲೆಗೆ ಮೆತ್ತಿ *"ತಾ, ತಾ, ತಾ," ಹಾಡನ್ನು ಮತ್ತೆ ಕೇಳಿಸಿದ್ದಾರೆ. " ತಾ, ತಾ, ತಾ,"* ಹಾಡನ್ನೇ ಸ್ವಲ್ಪ ಧ್ವನಿ ಬದಲಾವಣೆ ಮಾಡಿ ಕೇಳಿಸಿದಾಗ, ಹಾಡಿನಲ್ಲಾದ ಬದಲಾವಣೆಯನ್ನು ಗ್ರಹಿಸಿದ ಮಗುವಿನ ಮೆದುಳು ಹೆಚ್ಚು ಕ್ರಿಯಾ ಶೀಲವಾದದ್ದು ಕಂಡು ಬಂದಿದೆ.



ಇದೇ ಪ್ರಯೋಗವನ್ನು ಗರ್ಭದಲ್ಲಿದ್ದಾಗ *"ತಾ, ತಾ, ತಾ,"* ಹಾಡನ್ನು ಕೇಳದ ಇತರೆ ಮಕ್ಕಳಿಗೆ ನೆಡೆಸಿದಾಗ ಆ ಮಕ್ಕಳ ಮೆದುಳು ಯಾವುದೇ ಪ್ರತಿಕ್ರಿಯೆ ನೀಡಿಲ್ಲ. ಈ ಪ್ರಯೋಗದಿಂದ ವಿಜ್ಞಾನಿಗಳು ಮಕ್ಕಳು ಗರ್ಭದಲ್ಲಿ ಇರುವಾಗಲೇ ಪದಗಳನ್ನು ಕಲಿಯಲು ಪ್ರಾರಂಭಿಸಿರುತ್ತವೆ. ಹಾಗು ಭ್ರೂಣಗಳೂ ಆಲಿಸುತ್ತವೆ ಎಂದಿದ್ದಾರೆ.



- ಶಂಕರಪ್ಪ ಕೆ.ಪಿ




ಒಮ್ಮೆ ಹೊಲದ ಕಡೆ ನಡೆದು ಹೋಗುತಿದ್ದೆ. ಹೊಲವು ಸುಮಾರು ಒಂದು ಕಿಲೋ ಮೀಟರ್ ದೂರದಲ್ಲಿ ಕಾಡಿನ ಮಗ್ಗುಲ್ಲಲ್ಲೇ ಇದ್ದುದರಿಂದ ಇದನ್ನು *'ಕಾಡುಹೊಲ'* ಎಂದೆ ಕರೆಯುತ್ತೇವೆ. ಹೋಗುವ ದಾರಿಯ ಎರಡೂ ಕಡೆ ಊರಿಗೆ ಹೊಂದಿಕೊಂಡಂತೆಯೇ ಆಕಾಶಕ್ಕೆ ಬೆಳೆದು ನಿಂತಿರುವ ದೊಡ್ಡದೊಡ್ಡ ಲಂಟಾನ ಪೊದೆಗಳು ಕೆಂಪು, ಅರಿಶಿಣ, ಗುಲಾಬಿ ಬಣ್ಣದ ಹೂಗಳು ಬಿಟ್ಟಿರುವ ಲಂಟಾನ ಬೇಲಿಯು ಕಂಗೊಳಿಸುತಿತ್ತು. ಸಾವಿರಾರು ಬಣ್ಣದ ಚಿಟ್ಟೆಗಳು ಹೂವಿಂದ ಹೂವಿಗೆ ಹಾರಾಡುತ್ತ ರಸ್ತೆಯನ್ನು ದಾಟುತಿದ್ದವು, ಬೇಲಿಗಳ ಮೇಲೆಲ್ಲ ಮೋಡಗಳ ನೆರಳುಗಳು ಮೆಲ್ಲನೇ ಹರಿದು ಹೋಗುತ್ತಿದ್ದವು. ಕೇಳಲು ಹಕ್ಕಿಗಳ ಕಲರವ, ದುಂಬಿಗಳು ಹೂಗಳ ನಡುವೆ ಗುಂಯ್ ಗುಡುತಿದ್ದವು, ಕದಿರು ಗಿಣಿ ಸೂರಕ್ಕಿಗಳೆಲ್ಲ ಹೂವುಗಳ ಮೇಲೆಲ್ಲ ಹಾರಾಡುತ್ತ ಮಕರಂದ ಹೀರುತಿದ್ದವು. ಏನೋ ತಿಳಿಯದ ಖುಷಿ ಒಮ್ಮೆ ಹೊಮ್ಮಿ! ಮತ್ತೆ ಹೊಲದ ನೆನಪಾಗಿ ಹೆಜ್ಜೆಯನ್ನು ಜೋರುಮಾಡಿದೆ.

ಈರಿಯ ಮನೆಮುಂದೆ ಹೋಗಬೇಕಾದರೆ ಈರಿಯು ಮಂಕರಿಯ ತುಂಬಾ ಸಗಣಿಯ ಕಸವನ್ನು ತುಂಬಿ ತಲೆಯ ಮೇಲೆ ಎತ್ತಿಕೊಳ್ಳಲು ಕುಕ್ಕುರು ಗಾಲಿನಲ್ಲಿ ಕುಳಿತುಕೊಂಡು ತನ್ನ ಎರಡು ಕೈಗಳಲ್ಲಿ ಕಸದ ಮಂಕರಿಯನ್ನು ತಬ್ಬಿ ಹಿಡಿದು ಮೇಲಕ್ಕೆ ಎತ್ತಲು ಪ್ರಯತ್ನಿಸುತ್ತಿದ್ದಳು. ಆಗದೆ ಮಂಕರಿಯನ್ನು ದುಪ್ ಎಂದು ಕೆಳಗೆ ಬೀಳಿಸಿ ತುತ್ ಎನ್ನುತ್ತ ಕೆಳಗೆ ಬಿದ್ದಿರುವ ಸಗಣಿಯನ್ನು ಮತ್ತೆ ಮಂಕರಿಗೆ ತುಂಬಿಸುತ್ತಾ ದಾರಿಯಲ್ಲಿ ಯಾರಾದರು ಬರುತ್ತಾರ ಎಂದು ದಾರಿಯನ್ನು ಎದುರು ನೋಡುತ್ತಿದ್ದಳು. ಹಾಗೆ ಯಾವುದೋ ಗುಂಗಿನಲ್ಲಿ ಬರಬರನೆ ನಡೆದು ಹೋಗುತ್ತಿದ್ದ ನನ್ನನ್ನು ಕಂಡ ಈರಿಯು "ಏ ಬಾಪ್ಪೋ, ಸ್ವಲ್ಪ ಕಸದ ಮಂಕರಿ ಎತ್ತಿ ತಲೆಮೇಲೆ ಇಟ್ಟುಬಿಡಿಯಂತೆ ಎಂದು ಕೂಗಿಕೊಂಡಳು.



ಬೇಗ ಎತ್ತಿಟ್ಟು ಹೋಗೋಣ ಎಂದು ಹೋದೆ. ಈರಿಯು ಇಷ್ಟೊತ್ತು ಕಾದು ಯಾರು ಸಿಗಲಿಲ್ಲ ಎತ್ತಿಸಿಕೊಂಡು ಕಳಿಸಿಬಿಡೋಣ ಎನ್ನದೆ, ಯಾವುದೋ ಕತೆ ಪುರಾಣ ಹೇಳಲು ಶುರುಮಾಡಿದಳು. "ಅಹಾ ಅವ್ನು ಅವ್ನಲ್ಲ ಅವ್ನು. ಸಾಬಿ ಸುಬನ್! ಅವ್ನಕಾ ಯಾವ್ದು ಹಸುಗ್ಳು ಸಿಕ್ಕಿಲ್ಲಾ. ನಮ್ದೆ ಹಸು ಬೇಕಿತ್ತಾ. ಬಾಲದಾಗ ಇರೋ ಕುದ್ಲೆಲ್ಲ ಕಿತ್ಕೊಂಡೂ ಹೋಗ್ಬಿಟ್ಟವ್ನೆ" ಅವನೇನು ನಮ್ಮ ಹಸುವಿನ ಬಾಲದ ಕೂದಲಾಗ ಮೀಸೆಗೆ ಅಂಟಾಕೋತಾನಾ! ಅವ್ನು! ಎಂದು ಅವಳ ಹಸುವಿನ ಬಾಲವನ್ನು ಹಿಡಿದು ತೋರಿಸುತ್ತಾ ಬೈಯುತ್ತಿದ್ದಳು.

"ನಂಗೆ ಇವಾಗ ನಿನ್ನ ಪುರಾಣ ಕೇಳಕೆ ಟೈಮ್ ಇಲ್ಲ ನಾನು ಬೇಗಹೋಗಬೇಕು. ಮಂಕರಿ ಎತ್ತಲೋ, ಇಲ್ಲ ಹೋಗ್ಲೋ!" ಎಂದೆ "ಏ ಅಂಗೇನಾರು ಮಾಡ್ಬಿಟ್ಟೆಯ ಎತ್ಬುಡು" ಎಂದಳು ಮಂಕರಿಗೆ ಕೈಹಾಕಿ ಎತ್ತಲು ಪ್ರಯತ್ನಿಸಿದೆ. ಈರಿ ಯಾಕೆ ಮಂಕರಿಯನ್ನು ಎತ್ತಿಕೊಳ್ಳಲಾಗದೆ ಕೆಳಗೆ ದಬ್ಬಿದ್ದು ಎಂದು ಈಗ ತಿಳಿಯಿತು ನನಗೆ, ಬರಿ ಹಸಿಸಗಣಿ ಯಮಬಾರವಿತ್ತು. ಇಬ್ಬರು ಸೇರಿ ಎತ್ತಲು ತಿಣುಕಾಡಬೇಕಾಯಿತು ಹೇಗೋ ಕಷ್ಟಪಟ್ಟು ಎತ್ತಿ ಕಸವನ್ನು ತಿಪ್ಪೆಗೆ ಸೇರಿಸಿ ಆಯಿತು. ಯಾವುದೋ ಖುಷಿಯ ಮೂಡ್ನೆಲ್ಲ ಹಾಳು ಮಾಡಿದಳು ಎಂದು ಮನಸಿನಲ್ಲಿಯೇ ಬೈಯುತ್ತ ಮುಂದೆಸಾಗಿದೆ.

ದೂರದ ಲಂಟಾನ ಪೊದೆಯೊಂದು ಅಲುಗಾಡ ತೊಡಗಿತ್ತು. ಏನು? ಪೊದೆ ಇಷ್ಟು ಅಲುಗಾಡುತ್ತಿದೆ. ಯಾವುದೋ ಹಂದಿಯೇನೋ ಪೊದೆಯಲ್ಲಿ ಸೇರಿಕೊಂಡಿರಬೇಕು ಎಂದು ಹತ್ತಿರ ಹೋಗಿ ನೋಡಿದೆ. ಸುಬ್ಬನ್ ಸಾಬಿಯು ರಸ್ತೆಯ ಬದಿಯಲ್ಲಿ ಎತ್ತರಕ್ಕೆ ಬೆಳೆದಿದ್ದ ಲಂಟಾನ ಪೊದೆಯ ಕೆಳಗೆ ನಿಂತು, ಎತ್ತರದ ಕೊಂಬೆಯನ್ನು ಎಡಕೈಯಿಂದ ಎಟುಕಿಸಿ ರೆಂಬೆಯನ್ನು ನೆಗೆದು ಜಗ್ಗುತಿದ್ದನು. ಒಮ್ಮೆ ಸುಮ್ಮನೆ ಕೆಮ್ಮಿದೆ. ನನ್ನತ್ತ ನೋಡಲಿಲ್ಲ ಸುಬ್ಬನ್ ಸಾಬಿ, ಮತ್ತೊಮ್ಮೆ ಜೋರಾಗಿ ಕೆಮ್ಮಿ ಕ್ಯಾಕರಿಸಿದೆ. ಒಮ್ಮೆ ಬೆಚ್ಚಿಬಿದ್ದು ಹಿಂದಕ್ಕೆ ತಿರುಗಿ ಗಕ್ಕನೆ ತಲೆಯನ್ನು ಮೇಲಕ್ಕೆ ಎತ್ತಿ ನೋಡಿದ "ಹೊ ನೀವಾ. . .!" ಎಂದು ತಲೆಯನ್ನು ಕೆರೆದುಕೊಂಡು "ನಮ್ ಬಾಬಿ ಬೇಬಿಗೆ ಹಕ್ಕಿ ಬೇಕಂತೆ ಆಟ ಆಡೋಕೆ, ಉಳ್ಳು ಕಡ್ತಾ ಇದ್ದಿನಿ" ಎಂದು ತನ್ನ ಹಲ್ಲುಗಳನ್ನು ಕಿಸಿದ. "ಏನ್ ಹಕ್ಕಿ ಅದು?" ಎಂದೆ. "ಏ. . . ನುಗ್ಗೆ ಮರಕ್ಕೆ ಬರ್ತವಲ್ಲ ಅವು, ಗೂಡಗ ಎರಡು, ಬೂದು-ಬಿಳಿ ಚುಕ್ಕೆ ಇರೋ ಮೊಟ್ಟೆಗಳವೆ" ಎಂದು ಗೂಡನ್ನು ಕೆಳಕ್ಕೆ ಎಳೆದು ತೋರಿಸಿದ.

ನಮ್ ನುಗ್ಗೆ ಮರಕ್ಕೆ ಬರ್ಥವಲ್ಲ ಅಂದಾಗೆ ತಿಳಿಯಿತು. ಇವು ಸೂರಕ್ಕಿ ಅಥವಾ ಕದಿರುಗಿಳಿ ಇರ್ಬೇಕು ಅಂಥ. ಗೂಡನ್ನು ನೋಡಿದಾಗ ಖಚಿತವಾಯಿತು ಇದು "ಪರ್ಪಲ್-ರಂಪ್ಡ್ ಸನ್ಬರ್ಡ್" (ಕದಿರುಗಿಳಿ)ಹಕ್ಕಿ ಎಂದು. ಈ ಕದಿರುಗಿಳಿ ಹಕ್ಕಿಗಳು ನೋಡುವುದಕ್ಕೆ ಗುಬ್ಬಚ್ಚಿಗಿಂತ ಸ್ವಲ್ಪ ಚಿಕ್ಕದಾದ ಮಿರುಗುವ ನೇರಳೆ ಹಕ್ಕಿ. ಎದೆಯ ಭಾಗದಲ್ಲಿ ಹಳದಿ ಬಣ್ಣದಿಂದ ಕೂಡಿದೆ. ಸೂಜಿಯಂತಹ ಮೊನಚಾದ ಕೊಕ್ಕು. ಹೆಣ್ಣು ಹಕ್ಕಿಯ ದೇಹದ ಮೇಲ್ಭಾಗ ಬೂದಾಗಿರುತ್ತದೆ. ನೇತಾಡುವ ಗೂಡನ್ನು ಕಟ್ಟುತ್ತವೆ. ಜೇಡರ ಬಲೆ, ನಾರು, ಹತ್ತಿಯಂತಹ ಮೃದುವಾದ ವಸ್ತುಗಳಿಂದ ಒಳಭಾಗ ತುಂಬ ಬೆಚ್ಚಗೆ ಇರುವಂತೆ ಕಟ್ಟಿಕೊಂಡಿರುತ್ತವೆ. "ಪಾರಿವಾಳ ಏನಾದ್ರೂ ಸಾಕಿದ್ರೆ ಮಕ್ಕಳಿಗೆ ಖುಷಿಯಾಗುತ್ತೆ ಈ ಕಾಡಗಿರೋ ಸಣ್ಣ ಹಕ್ಕಿ ಇಡ್ಕೊಂಡೋಗಿ ಅದ್ರು ಗೋಳು ಉಯ್ಕೊತೀಯ ಅಂತ ಬೈಯ್ದೆ" ಇಲ್ಲ ಅದು...!" ಎಂದು ಮೇಲಕ್ಕೆ ಬರುವಂತೆ ನಟಿಸುತಿದ್ದ. ಹಾಳಾಗಿ ಹೋಗ್ಲಿ ಎನ್ನುತ್ತಾ ನಾನು ದಾರಿಹಿಡಿದೆ .

ದಾರಿಯಲ್ಲಿ ನಡೆಯಬೇಕಾದರೆ ಈರಿ ಸುಬ್ಬನ್ ಸಾಬಿಯನ್ನು ಬೈಯುತಿದದ್ದು ನೆನಪಿಗೆ ಬಂದು ಸುಬ್ಬನ್ ಸಾಬಿ ಹಕ್ಕಿಗೆ ಉಳ್ಳು (ಉರುಳು) ಹಾಕುತ್ತಿದದ್ದು ಈರಿಯ ಹಸುವಿನ ಬಾಲದ ಕೂದಲಿನಿಂದ, ಅದಕ್ಕೆ ಈರಿಯಿಂದ ಬೈಸಿಕೊಳ್ಳುತಿದ್ದದ್ದು ನಿಜ. ಎಂದು ಮುಂದುವರಿದೆ. ಹೊಲದಿಂದ ಬರಬೇಕಾದರೆ ಸುಬ್ಬನ್ ಸಾಬಿಯ ಅತ್ತಿಗೆಯ ಮಗುವಿನ ಕೈಯಲ್ಲಿ ದಾರದಿಂದ ಕಟ್ಟಿದ ಹಕ್ಕಿ ಪುರ್. . . ಪುರ್. . . ಎಂದು ಹಾರಲು ಪ್ರಯತ್ನಿಸುತ್ತಿತ್ತು. ಆ ಮಗು ಮತ್ತೆ ಕೆಳಕ್ಕೆ ದಾರವನ್ನು ಜಗಿಯುತ್ತಿತ್ತು. ಸುಬ್ಬನ್ ಸಾಬಿಗೆ ಮಗುವಿನ ಈ ಆಟವನ್ನು ನೋಡಿ ಖುಷಿಯಾಗಿತ್ತು. ಒಳಒಳಗೆಯೇ ಮುಗುಳ್ನಗುತ್ತಿದ್ದ. ದೂರದಲ್ಲಿ ಈರಿಯು ಸುಬ್ಬನ್ ಸಾಬಿಯ ಅಪ್ಪನಿಗೆ ದೂರು ಹೇಳುತ್ತಾ ಜಗಳವಾಡುತ್ತಿದ್ದಳು. ನನಗೆ ಈ ಹಕ್ಕಿ ಲೋಕದ ದೃಶ್ಯವನ್ನು ನೋಡಿ, ಈ ಜಗದ ಕಾನನದಲ್ಲಿ ಈರಿ, ಸುಬ್ಬನ್ ಸಾಬಿಯಂತಹ ಪರಿ, ಸೋಜಿಗ ಎನಿಸಿ ಮನೆಯ ಕಡೆ ನಡೆದೆ!



- ಅಶ್ವಥ ಕೆ.ಎನ್

# ಮರೆಯಾದವೇನೋ? ಈಗ

ಜೇಡರ ಬಲೆ
ಬಣ್ಣದ ಚಿಟ್ಟೆ
ಕೋಗಿಲೆಯ ಹಾಡು
ಕೆರೆಯ ನೀರು ಕೋಳಿ
ಮರೆಯಾದವೇನೋ? ಈಗ

ಅಂಗಳದ ಗುಬ್ಬಿ
ಗೀಜಗನ ಗೂಡು
ಹಾರುವ ಮಿಡತೆ
ಕತ್ತಲ ರಾತ್ರಿಯ ಮಿಂಚುಹುಳು
ಮರೆಯಾದವೇನೋ? ಈಗ

ಬೇಲಿಯ ಹೂವು
ದುಂಬಿಯ ನಾದ
ಗಿಳಿ ಗೊರವ ಮರಕುಟಿಗ
ಕಂಬಳಿ, ಹಸಿರು ಹುಳು
ಮರೆಯಾದವೇನೋ? ಈಗ

ಕಾರೆ ನೆರಳೆ ಹಣ್ಣು
ಹುಣಸೆ, ಬೇಲದ ಕಾಯಿ
ತುಡುವೆ, ಕಡ್ಡಿ ಜೇನು
ಝರಿ ನೀರಿನ ಸವಿಯು
ಮರೆಯಾದವೇನೋ? ಈಗ

- ಕೃಷ್ಣನಾಯಕ್



# ಮುಂಜಾನೆ

ಮಳೆ ಹನಿಯ
ಸದ್ದಿನಲಿ
ಮುಂಜಾನೆಯ ಮುಸುಕಿನಲಿ
ಅರಳಿದೆ ತಾವರೆ
ಕೆಂಪಾಗಿ
ಕೂಗಿರಲು ಕೋಗಿಲೆ
ಕುಣಿಯಿತಿರಲು ನವಿಲು
ಕಳೆದಿದೆ ದುಃಖ ಮಾಯವಾಗಿ
ಬಂದಿದೆ ನಿದ್ದೆ ಹಾಯಾಗಿ
ಇಣುಕಿರುವ ಸೂರ್ಯ
ಮರೆಯಾದ ಚಂದ್ರ
ಕಾಣುತಿದೆ ಆಗಸ ರಂಗಾಗಿ
ತೇಲುತಿದೆ ಮನ ಹಾಯಾಗಿ

– ಶ್ರೀಕಾಂತ್ ಬಿ. ಭಟ್

